

# ಜೇಮ್ಸ್ ವ್ಯಾಟ್ ನ (1736-1819) ಉಗಿ ಇಂಜಿನ್ನು




ಜೇಮ್ಸ್ ವ್ಯಾಟ್ ಸ್ಕಾಟಲ್ಯಾಂಡಿನ ಗ್ರೀನೌಕ್ ಎಂಬ ಮೀನುಗಾರರೇ ಹೆಚ್ಚಿರುವ ಒಂದು ಹಳ್ಳಿಯಲ್ಲಿ ಹುಟ್ಟಿದನು. ಆತನು ಬಹು ಜಾಣನು. ಆದರೆ ಶಾಲೆಗೆ ಹೋಗುವದರಲ್ಲಿ ಆತನಿಗೆ ಇಷ್ಟವಿರಲಿಲ್ಲ. ಆದ್ದರಿಂದ ಮನೆಯಲ್ಲಿಯೇ ಹರಕು-ಮುರಕು ವಸ್ತುಗಳನ್ನು ರಿಪೇರಿ ಮಾಡಿ ಏನಾದರೂ ಮಾಡುತ್ತಿರುತ್ತಿದ್ದನು.




ಶಾಲೆಗೆ ಸರಿಯಾಗಿ ಹೋಗುತ್ತಿದ್ದರೆ ಆತನು ಒಂದನೇ ನಂಬರು ಗಳಿಸಬಹುದಿತ್ತು. ಆದರೆ ಆತನ ಶಾಲೆಯಲ್ಲಿಯ ಹಾಜರಿ ಬಹಳ ಕಡಿಮೆ ಇರುತ್ತಿತ್ತು.




ಕೊನೆಗೆ ಜೇಮ್ಸ್ ನಿಗೆ ಗ್ಲಾಸ್ಗೋ ಯುನಿವರ್ಸಿಟಿಯಲ್ಲಿ ಪ್ರಯೋಗಶಾಲೆಯಲ್ಲಿಯ ಉಪಕರಣಗಳನ್ನು ತೊಳೆದಿಡುವ ಚಾಕರಿ ದೊರೆಯಿತು.




ಒಂದು ದಿನ ಜೇಮ್ಸ್ ನ ಗೆಳೆಯನು ಒಂದು ನ್ಯುಕೋಮಿನ್ ಇಂಜಿನ್ನಿನ ಮಾದರಿಯನ್ನು ದುರುಸ್ತಿ ಮಾಡಲೆಂದು ಅವನಿಗೆ ಕೊಟ್ಟನು.










ಜೇಮ್ಸ್ ಈ ಇಂಜಿನ್ನಿನ ಬಗ್ಗೆ ಕೇಳಿದ್ದನು. ಈ ಇಂಜಿನ್ನಿನ ಶೋಧವನ್ನು ಥಾಮಸ್ ನ್ಯೂಕೋಮಿನ್ ನು ಮಾಡಿದ್ದರಿಂದ ಆ ಇಂಜಿನ್ನಿಗೆ ಅವನ ಹೆಸರನ್ನು ಕೊಡಲಾಗಿತ್ತು. ಈ ಇಂಜಿನ್ನನ್ನು ಕಲ್ಲಿದ್ದಲಿಯ ಗಣಿಗಳಲ್ಲಿ ಶೇಖರಿಸಿದ ನೀರನ್ನು ಹೊರಚೆಲ್ಲಲು ಗಣಿ ಕೆಲಸಗಾರರು ಉಪಯೋಗಿಸುತ್ತಿದ್ದರು. ಇಂಜಿನ್ನಿನ ಕಲ್ಪನೆ ಸರಿ ಇದ್ದರೂ ಅದು ಸರಿಯಾಗಿ ಕೆಲಸ ಮಾಡುತ್ತಿರಲಿಲ್ಲ.










ಜೇಮ್ಸ್ ನು ತಿರುಗಾಡಲು ಹೋದಾಗ ಅವನಿಗೆ ಒಂದು ವಿಚಾರ ಹೊಳೆಯಿತು. ಈ ಹಳೆ ಇಂಜಿನ್ನಿನಲ್ಲಿ ಸಾಕಷ್ಟು ಸುಧಾರಣೆ ಮಾಡಬಹುದು. ಇದಕ್ಕಾಗಿ ಜೇಮ್ಸ್ ನು ಒಂದು ಬೇರೆ ಕೂಲಿಂಗ ಚೇಂಬರನ್ನು ತಯಾರಿಸಿದರೆ ಉಗಿ ತನ್ನಷ್ಟಕ್ಕೆ ತಾನೇ ತಣ್ಣಗಾಗಬಹುದು.







ಇಷ್ಟಾದರೂ ಜೇಮ್ಸ್ ನಿಗೆ ತನ್ನ ಇಂಜಿನ್ನಿನ ನಿರ್ಮಾಣಕ್ಕಾಗಿ ದುಡ್ಡು ಒಟ್ಟುಗೂಡಿಸಲು ಸಾಧ್ಯವಾಗಲಿಲ್ಲ. 11 ವರುಷ ಬೇರೆ ಬೇರೆ ಚಾಕರಿ ಮಾಡಿ ಬೇಸತ್ತಿದ್ದನು.




ಕೊನೆಯಲ್ಲಿ ಜೇಮ್ಸ್ ನಿಗೆ ಮ್ಯಾಥ್ಯೂ ಬೋಲ್ಟನ್ ಎಂಬ ವ್ಯಾಪಾರಸ್ಥನು ದೊರೆತನು. ಇಬ್ಬರೂ ಕೂಡಿ ಒಂದು ಇಂಜಿನ್ನು ತಯಾರಿಸುವ ಕಾರಖಾನೆಯನ್ನು ಪ್ರಾರಂಭಿಸಿದರು.



ಜೇಮ್ಸ್ ವ್ಯಾಟ್ ನ ಇಂಜಿನ್ನು ಕೊನೆಯಲ್ಲಿ 1776ರಲ್ಲಿ ತಯಾರಾಯಿತು. ಈ ಇಂಜಿನ್ನು ಗಣಿಗಳಲ್ಲಿಯ ನೀರನ್ನೆಲ್ಲ ಪಂಪು ಮಾಡಿ ಹೊರಚೆಲ್ಲುತ್ತಿತ್ತು. ನ್ಯೂಕೋಮಿನ್ ಇಂಜಿನ್ನಿನ ತುಲನೆಯಲ್ಲಿ ಇದು ಬಹಳ ಕಡಿಮೆ ಇದ್ದಲಿಯ ಬಳಕೆ ಮಾಡುತ್ತಲಿತ್ತು. ಗಣಿಯನ್ನು ಒಣದಾಗಿಡುತ್ತಿದ್ದರಿಂದ ಕೂಲಿಗಾರರು ಸಂತಸವಾದರು. ಈ ನೂತನ ಇಂಜಿನ್ನನ್ನು ಇನ್ನೂ ಬೇರೆ ಬೇರೆ  ಬಟ್ಟೆಯ ತಯಾರಿಸುವಂತಹ ಉದ್ಯೋಗಗಳಲ್ಲಿ ಅಳವಡಿಸಲಾಯಿತು. ಈ ಉದ್ಯೋಗಗಳು ಊರ್ಜಿತಾವಸ್ಥೆಯಲ್ಲಿ ಬಂದವು. ಜೇಮ್ಸ್ ವ್ಯಾಟ್ ತನ್ನ ಇಂಜಿನ್ನಿನಲ್ಲಿ ಸಾಕಷ್ಟು ಸುಧಾರಣೆ ಮಾಡುತ್ತಿದ್ದನು. ಇದರಿಂದಾಗಿ  ಆತ ಸಿರಿವಂತನಾದನು. ಅವನಿಗೆ ಕೆಲಸ ಮಾಡುವ ಅಗತ್ಯವಿರಲಿಲ್ಲ. ಆತನ ತಲೆಯಲ್ಲಿ ಚಲಿಸುವ ಉಗಿ ಇಂಜಿನ್ನನ್ನು ಮಾಡುವ ಕಲ್ಪನೆ ಇತ್ತು. ಆದ್ದರಿಂದ ಆತನು ತನ್ನ ವರ್ಕಶಾಪಿಗೆ ಮರಳಿ ತನ್ನ ಉಳಿದ ಆಯುಸ್ಸನ್ನು ಏನಾದರೂ ಹೊಸದು ಮಾಡುವದರಲ್ಲಿ ಕಳೆಯತೊಡಗಿದನು.

